ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 03 ನೇ ಮಾರ್ಚ್, 2020

ಕರ್ನಾಟಕ ರಾಜ್ಯದ ಉಗ್ರಾಣ ನಿಗಮದ ಬಗ್ಗೆ

ಶ್ರೀ ಹೆಚ್. ಎಂ. ರೇವಣ್ಣ (ವಿಧಾನ ಸಭೆಯಿಂದ ಚುನಾಯಿತರಾದವರು) :-

130 (192) ಮಾನ್ಯ ಸಹಕಾರ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದ ವಿವಿಧ ಭಾಗಗಳಲ್ಲಿ 2015-16ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ಉಗ್ರಾಣ ನಿಗಮದಿಂದ 11.25 (ಲಕ್ಷ ಮೆಟ್ರಿಕ್ ಟನ್) ಸಾಮರ್ಥ್ಯದ ಉಗ್ರಾಣಗಳನ್ನು ನಿರ್ಮಾಣ ಮಾಡಲು ಯಾವ ಸಂಸ್ಥೆಗೆ ಯಾವ ದಿನಾಂಕದಂದು ಕಾರ್ಯಾದೇಶ ನೀಡಲಾಯಿತು;

(ಆ) ಕಾರ್ಯಾದೇಶದಂತೆ 11.25 (ಎಲ್.ಎಂ.ಟಿ) ಸಾಮರ್ಥ್ಯದ ಉಗ್ರಾಣವನ್ನು ನಿಗಧಿತ ಸಮಯದಲ್ಲಿ ನಿರ್ಮಿಸಲಾಗಿದೆಯೇ; ನಿರ್ಮಿಸದಿದ್ದಲ್ಲಿ, ಕಾರಣವೇನು ಮತ್ತು ಕಾರ್ಯಾದೇಶದಲ್ಲಿ ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸದ ಗುತ್ತಿಗೆದಾರರ ವಿರುದ್ಧ ಕೈಗೊಂಡ ಕ್ರಮವೇನು;

(ಇ) 11.25 (ಎಲ್.ಎಂ.ಟಿ) ಉಗ್ರಾಣ ನಿರ್ಮಾಣದಲ್ಲಿ ಉಂಟಾಗಿರುವ ನಿಯಮಗಳ ಉಲ್ಲಂಘನೆ ಬಗ್ಗೆ ಲೋಕೋಪಯೋಗಿ ಇಲಾಖೆಯ ನಿವೃತ್ತ ಎಸ್.ಇ ಮತ್ತು ಇ.ಇ ಮುಂತಾದ ಅಧಿಕಾರಿಗಳಿಂದ ತನಿಖೆ ನಡೆಸಿ ವರದಿ ಪಡೆದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ವರದಿ ಬಂದಿದ್ದಲ್ಲಿ, ಸದರಿ ವರದಿ ಅನ್ವಯ ತಪ್ಪಿತಸ್ಥ ಅಧಿಕಾರಿಗಳ ವಿರುದ್ಧ ಮತ್ತು ಗುತ್ತಿಗೆದಾರರ ವಿರುದ್ಧ ಕಾನೂನು ಕ್ರಮ ಕೈಗೊಳ್ಳಲಾಗಿದೆಯೇ; ಕ್ರಮ ಕೈಗೊಳ್ಳದಿದ್ದಲ್ಲಿ, ಕಾರಣವೇನು; ಶಿಸ್ತು ಕ್ರಮ ಕೈಗೊಂಡಿದ್ದಲ್ಲಿ, ಕೈಗೊಂಡ ಕ್ರಮವೇನು ; (ವಿವರ ನೀಡುವುದು)

(ಈ) ಗುತ್ತಿಗೆದಾರರಿಗೆ ಇದುವರೆಗೂ ಪಾವತಿಸಿದ ಒಟ್ಟು ಹಣವೆಷ್ಟು; ಯಾವ ಯಾವ ದಿನಾಂಕದಂದು ಪಾವತಿಸಿದೆ ; ಪಾವತಿಸಿದ ದಿನಾಂಕ, ಚೆಕ್ ನಂಬರ್ ಮುಂತಾದ ವಿವರಗಳು, ಪಾವತಿಸಲು ಅನುಸರಿಸಿದ ಕ್ರಮ ಮತ್ತು ನಿರ್ಮಾಣದ ಪ್ರಗತಿಯ ವಿವರ ನೀಡುವುದು;

(ಉ) ಇತ್ತೀಚೆಗೆ ಕೊನೆಯದಾಗಿ ಕಾಮಗಾರಿಯು ಪ್ರಗತಿ ಇಲ್ಲದಿದ್ದರೂ ಗುತ್ತಿಗೆದಾರರಿಗೆ ರೂ. 15.00 ಕೋಟಿ ಪಾವತಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ಕ್ರಮವು ದಿನಾಂಕ: 28.09.2018ರಂದು ಉಗ್ರಾಣ ಇಲಾಖೆಯ ಆಡಳಿತ ಮಂಡಳಿ

ಕೈಗೊಂಡ ನಿರ್ಣಯಕ್ಕೆ/ನಿರ್ಧಾರಕ್ಕೆ ಮತ್ತು ನಿವೃತ್ತ ಎಸ್.ಇ/ಇ.ಇ ಇತರೆ ಅಧಿಕಾರಿಗಳು ನೀಡಿದ ವರದಿಯ ವಿರುದ್ಧವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಊ) ರೂ. 15.00 ಕೋಟಿಗಳನ್ನು ಸರ್ಕಾರದ ಅನುಮತಿ ಇಲ್ಲದೆ/ ಮಂಡಳಿಯ ಅನುಮತಿ ಪಡೆಯದೇ ಗುತ್ತಿಗೆದಾರರಿಂದ ಮುಚ್ಚಳಿಕೆ ಪಡೆಯದೆ ಒಂದೇ ದಿನದಲ್ಲಿ ಪಾವತಿಸಿರುವುದು ವ್ಯವಸ್ಥಾಪಕ ನಿರ್ದೇಶಕರ ಮತ್ತು ಕಾರ್ಯಪಾಲಕ ಅಭಿಯಂತರರ ಅಧಿಕಾರ ದುರುಪಯೋಗವಲ್ಲವೇ? (ವಿವರ ನೀಡುವುದು)